


# ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 17-03-2021 ಪ್ರಶ್ನೆ ಸಂಖ್ಯೆ : 203 (1482+1426)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು)

ಶ್ರೀ ಹೆಚ್.ಎಂ. ರಮೇಶಗೌಡ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 17-03-2021

ಉತ್ತರಿಸುವ ಸಚಿವರು : ಕಂದಾಯ ಸಚಿವರು

ವಿಷಯ : ಸರ್ವೆ ಸ್ಕೆಚ್‌ಗಳನ್ನು ನೀಡಲು ವಿಳಂಬವಾಗುತ್ತಿರುವುದು ಭೂ ದಾಖಲೆಗಳ Digitalization ಮಾಡುವ ಕುರಿತು

(ಅ) ಕಳೆದ 5 ವರ್ಷಗಳಲ್ಲಿ ಭೂ ಸಮೀಕ್ಷೆಗಾಗಿ ಅಂದರೆ, ಸರ್ವೆ ಸ್ಕೆಚ್, 11-ಇ ನಕ್ಷೆ, ಭೂ ಪರಿವರ್ತನೆ ನಕ್ಷೆ, ಹದ್ದುಬಸ್ತು, ತತ್ಕಾಲ್ ಮತ್ತು ಭೂಸ್ವಾಧೀನ, ಪೋಡಿ (JMC ನಕ್ಷೆ)ಗಳಿಗಾಗಿ ಕೋರಿ ಸ್ವೀಕೃತವಾದ ಪ್ರಕರಣಗಳ ಸಂಖ್ಯೆ ಎಷ್ಟು; ಇವುಗಳಲ್ಲಿ ಎಷ್ಟು ಅರ್ಜಿಗಳನ್ನು ಪರಿಗಣಿಸಿ ವಿಲೇವಾರಿ ಮಾಡಲಾಗಿದೆ; ಬಾಕಿ ಉಳಿದಿರುವ ಪ್ರಕರಣಗಳೆಷ್ಟು ; ಈ ಪ್ರಕರಣಗಳನ್ನು ವಿಲೇವಾರಿ ಮಾಡಲು ಇರುವ ಅಡೆತಡೆಗಳೇನು ; (ವರ್ಷವಾರು ಮತ್ತು ಜಿಲ್ಲಾವಾರು ಮಾಹಿತಿ ನೀಡುವುದು)

(ಆ) ಭೂ ಸಮೀಕ್ಷೆ, ಸರ್ವೆ ಆಗಿ ಬಂದ ಪ್ರಕರಣಗಳಲ್ಲಿ ಎಷ್ಟು ದಿನಗಳಲ್ಲಿ ಸಂಬಂಧಿಸಿದ ಕಂದಾಯ ಮತ್ತು ಸರ್ವೆ ಇಲಾಖೆಗಳ ದಾಖಲೆಗಳ ಇಂಡೀಕರಣ ಮಾಡಲು ಅವಧಿ ನಿಗದಿಪಡಿಸಲಾಗಿದೆ ; ಸರ್ವೆ ಸ್ಕೆಚ್ ಮಾಡಲು ಇರುವ ಮಾನದಂಡಗಳೇನು ;

(ಇ) ಕೇಂದ್ರ ಸರ್ಕಾರದ National Digital India ಯೋಜನೆ ಅಡಿ ಭೂ ದಾಖಲೆ, ದಾಖಲೆಗಳ ನೋಂದಣಿ, ಜನನ ಮತ್ತು ಮರಣಗಳ ರಿಜಿಸ್ಟರ್ ಮತ್ತು ಸರ್ಟಿಫಿಕೇಟ್ ಮುಂತಾದವುಗಳನ್ನು digitalize ಮಾಡಿ ಸಾರ್ವಜನಿಕರಿಗೆ ಅನುಕೂಲ ಮಾಡಲು Department of Electronics & Information Technology ಯಿಂದ ಧನ ಸಹಾಯ ನೀಡುತ್ತಿದ್ದು, ಕಳೆದ 5 ವರ್ಷಗಳ ಈ ಧನ ಸಹಾಯವನ್ನು ಬಳಸಿ, ಯಾವ ಯಾವ ದಾಖಲೆಗಳನ್ನು ಡಿಜಿಟಲೈಜ್ ಮಾಡಲಾಗಿದೆ ? (ಸಂಪೂರ್ಣ ಮಾಹಿತಿ ನೀಡುವುದು)